

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 669(852)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

ವಿಷಯ : ಸಕ್ಕರೆ ಕಾರ್ಖಾನೆಗಳ ಬಗ್ಗೆ

(ಅ) ಮಂಡ್ಯ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಸರ್ಕಾರಿ ಮತ್ತು ಖಾಸಗಿ ಸಕ್ಕರೆ ಕಾರ್ಖಾನೆಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) ಸರ್ಕಾರಿ ವ್ಯಾಪ್ತಿಯ ಎಷ್ಟು ಕಾರ್ಖಾನೆಗಳನ್ನು ಖಾಸಗಿ ಸಹಭಾಗಿತ್ವಕ್ಕೆ ನೀಡಲಾಗಿದೆ; ಯಾರಿಗೆ/ಯಾವ ಸಂಸ್ಥೆಗೆ ನೀಡಲಾಗಿದೆ; ಲೀಸ್ ನೀಡಿದ್ದಲ್ಲಿ, ಲೀಸ್‌ನ ಅವಧಿ ಎಷ್ಟು; (ವಿವರ ನೀಡುವುದು)

(ಆ) ಮಂಡ್ಯ ಸಕ್ಕರೆ ಕಾರ್ಖಾನೆ ಪ್ರಾರಂಭವಾಗುವುದು ಯಾವಾಗ; ಈ ಹಿಂದಿನ ಸರ್ಕಾರ ಕಾರ್ಖಾನೆ ಪ್ರಾರಂಭಿಸಲು ಕ್ರಿಯಾಯೋಜನೆ ಸಿದ್ಧಪಡಿಸಿ ಪ್ರಾರಂಭ ಮಾಡಲು ಅಗತ್ಯ ಅನುದಾನದ ಬಿಡುಗಡೆ ಮಾಡಲಾಗಿದ್ದರೂ ಸಕ್ಕರೆ ಕಾರ್ಖಾನೆ ಪ್ರಾರಂಭಿಸದಿರಲು ಕಾರಣವೇನು;

(ಇ) ಈ ಭಾಗದಲ್ಲಿ ರೈತರು ಬೆಳೆಯುವ ಕಬ್ಬನ್ನು ಪ್ರಸ್ತುತ ಯಾವ ರೀತಿಯಲ್ಲಿ ವಿಲೆ ಮಾಡಲು ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು)

(ಈ) ಕಬ್ಬು ಬೆಳೆದು ನಷ್ಟದಲ್ಲಿರುವ ರೈತರಿಗೆ ವಿಶೇಷ ಪ್ಯಾಕೇಜ್ ಅಥವಾ ಪರಿಹಾರ ಘೋಷಣೆ ಮಾಡಲಾಗಿದೆಯೇ; ಹಾಗಿದ್ದರೆ, ಈವರೆವಿಗೆ ಎಷ್ಟು ಫಲಾನುಭವಿಗಳಿಗೆ ಪರಿಹಾರದ ಮೊತ್ತ ವಿತರಿಸಲಾಗಿದೆ? (ತಾಲ್ಲೂಕುವಾರು ವಿವರ ನೀಡುವುದು)